

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1613 (1823)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

ವಿಷಯ : ಅರಣ್ಯ ಇಲಾಖೆಯಲ್ಲಿ ಲಿಖಿತ ನೌಕರರಿಗೆ ಆಗುವ ಬಡ್ತಿಯಲ್ಲಿ ಅನ್ಯಾಯವಾಗುತ್ತಿರುವ ಬಗ್ಗೆ

(ಅ) ಅರಣ್ಯ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರಥಮ ದರ್ಜೆ ಸಹಾಯಕ, ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ನೇಮಕಾತಿ ಆದ ಸಿಬ್ಬಂದಿಗೆ ಬಡ್ತಿ ನೀಡುವಲ್ಲಿ ವಿಳಂಬ ನೀತಿಯನ್ನು ಅನುಸರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತಿದೆಯೇ; ಬಂದಿದ್ದಲ್ಲಿ, ಇದಕ್ಕೆ ಇರುವ ಮಾನದಂಡವೇನು; (ವಿವರ ನೀಡುವುದು)

(ಆ) ಈಗಾಗಲೇ ದ್ವಿತೀಯ ದರ್ಜೆ ಸಹಾಯಕ ಹುದ್ದೆ ನೇಮಕಾತಿ ಆದವರು ಬಹಳ ವರ್ಷಗಳಿಂದ ಪ್ರಥಮ ದರ್ಜೆ ಸಹಾಯಕ ಹುದ್ದೆಗೆ ಬಡ್ತಿ ಆಗದೇ ಹಾಗೂ ಪ್ರಥಮ ದರ್ಜೆ ಸಹಾಯ ಹುದ್ದೆಯಲ್ಲಿರುವವರು ಅಧೀಕ್ಷಕರ ಹುದ್ದೆ ಬಡ್ತಿಗೆ ಬಹಳಷ್ಟು ವರ್ಷಗಳಿಂದ ಕಾಯುತ್ತಾ ಇರುವ ವಿಷಯ ಸರ್ಕಾರದ ಗಮನಕ್ಕೆ ಬಂದಿರುತ್ತದೆಯೇ; ಬಂದಿದ್ದಲ್ಲಿ ಬಡ್ತಿ ನೀಡದಿರಲು ಕಾರಣವೇನು;

(ಇ) ಆದರೆ ಅರಣ್ಯ ರಕ್ಷಕ ಹಾಗೂ ವನ ಪಾಲಕ ಹುದ್ದೆಗೆ ಬಡ್ತಿ ನೀಡುವಲ್ಲಿ ಕೂಡಲೇ ಕ್ರಮಕೈಗೊಳ್ಳಲಾಗುತ್ತದೆ; ಸದರಿ ವಿಷಯದಲ್ಲಿ ಸರ್ಕಾರ ಗಮನ ಹರಿಸಿ ಬಹಳಷ್ಟು ವರ್ಷಗಳಿಂದ ಒಂದೇ ಹುದ್ದೆಯಲ್ಲಿ ಲಿಪಿಕ ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದರೂ ಬಡ್ತಿಯಲ್ಲಿ ಅನುಕೂಲ ಮಾಡಿಕೊಡಲು ಸರ್ಕಾರ ಸಹಾಯ ಮಾಡುವರೇ; (ವಿವರ ನೀಡುವುದು)

(ಈ) ರಾಜ್ಯದಲ್ಲಿ ಖಾಲಿ ಇರುವ ಲಿಪಿಕ ವೃಂದದ ಹುದ್ದೆಗಳಾದ ದ್ವಿತೀಯ ದರ್ಜೆ ಸಹಾಯಕ ಮತ್ತು ಪ್ರಥಮ ದರ್ಜೆ ಸಹಾಯಕ ಹಾಗೂ ಅಧೀಕ್ಷಕ ಹುದ್ದೆಗಳ ಸಂಖ್ಯೆ ಎಷ್ಟು; (ವರ್ಷವಾರು, ವಿಭಾಗವಾರು ಮಾಹಿತಿ ನೀಡುವುದು)

(ಉ) ಈ ರೀತಿ ಬಹಳಷ್ಟು ವರ್ಷಗಳಿಂದ ಒಂದೇ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಲಿಪಿಕ ನೌಕರರಿಗೆ ಖಾಲಿ ಇರುವ ಹುದ್ದೆಯಲ್ಲಿ ಹಂತ ಹಂತವಾಗಿ ಬಡ್ತಿ ನೀಡಿ ಅನುಕೂಲ ಮಾಡಿ ಕೊಡುವರೇ? (ವಿವರ ನೀಡುವುದು)